# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೫, ೨೦೧೬ (ಭಾದ್ರಪದ ೨೪, ಶಕ ವರ್ಷ ೧೯೩೮)<br>Bengaluru, Thursday, September 15, 2016 ( Bhadrapada 24, Shaka Varsha 1938) | ಸಂಚಿಕೆ ೩೭<br>Issue 37 |
|---|---|---|

## ಭಾಗ ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು

### ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ನಅಇ 100 ಬೆಮಪ್ರಾ 2016, ಬೆಂಗಳೂರು ದಿನಾಂಕ : 12-08-2016**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಅಧಿನಿಯಮ, 1987ರ ಕಲಂ 17(1)ರಡಿಯಲ್ಲಿ ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರದ ವಿಶೇಷ ಭೂಸ್ವಾಧೀನಾಧಿಕಾರಗಳ ಅಧಿಸೂಚನೆ ಸಂಖ್ಯೆ: ಬೆನಪ್ರಾ/ಭೂಸ್ವಾ/ಯೋ-8/2003-04, ಬೆಳಗಾವಿ ದಿನಾಂಕ: 27.04.2006ರಂದು ಅಧಿಸೂಚನೆ ಪ್ರಕಟಿಸಲಾಗಿದೆ. ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಅಧಿನಿಯಮ, 1987ರ ಕಲಂ 19(1)ರ ಮೇರೆಗೆ ಮಹಾನಗರ ವ್ಯಾಪ್ತಿಯಲ್ಲಿ ಬರುವ ಪ್ರದೇಶದಲ್ಲಿ ಸರ್ಕಾರ ಈ ಕೆಳಕಂಡ ಅನುಸೂಚಿಯಲ್ಲಿ ತೋರಿಸಿದ ಜಮೀನುಗಳ ಯೋಜನೆ ಸಂಖ್ಯೆ: 8ನ್ನು ನಿರ್ಮಿಸಲು ಬೇಕಾಗಬಹುದೆಂದು ಹಾಗೂ ಭೂಸ್ವಾಧೀನ ಪಡಿಸಿಕೊಳ್ಳುವುದು ಅವಶ್ಯವಿದೆ ಎಂದು ಈ ಮೂಲಕ ಘೋಷಿಸಲಾಗಿದೆ. ಸದರಿ ಜಮೀನುಗಳ ಒಂದು ಕರಡು ನಕ್ಷೆಯನ್ನು ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರದ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

ಸದರಿ ಜಮೀನುಗಳನ್ನು ಭೂಸ್ವಾಧೀನ ಪಡಿಸಿಕೊಳ್ಳಲು ಪ್ರಸ್ತುತ ಜಾರಿಯಲ್ಲಿರುವ ಕಾಯ್ದೆಯನ್ವಯ ಜಿಲ್ಲಾಧಿಕಾರಿಗಳು, ಬೆಳಗಾವಿ ಇವರು ಕೈಕೊಳ್ಳಬೇಕಾದ ಎಲ್ಲಾ ಕಾರ್ಯಗಳನ್ನು ನಿರ್ವಹಿಸುವ ಕುರಿತು ವಿಶೇಷ ಭೂಸ್ವಾಧೀನ ಅಧಿಕಾರಿ, ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರ, ಬೆಳಗಾವಿ ಇವರನ್ನು ಸದರಿ ಜಮೀನಿನ ಸಂಬಂಧದಲ್ಲಿ ಮುಂದಿನ ಎಲ್ಲಾ ಕಾನೂನು ಕ್ರಮಗಳನ್ನು ಕೈಗೊಳ್ಳಲು ಈ ಮೂಲಕ ನೇಮಕ ಮಾಡಲಾಗಿದೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಅನುಸೂಚಿ**

| ಅ. ಸಂ. | ಖಾತೆದಾರ/ಅನುಬಂಧದಾರನ ಹೆಸರು | ಹೋಬಳಿ | ಗ್ರಾಮ | ರಿ.ಸ. ನಂ. | ಜಮೀನು ನಮೂನೆ ಮಣ್ಣಿನ ತರಹೆ | ಒಟ್ಟು ಕ್ಷೇತ್ರ | ಆಕಾರ | ಸ್ವಾಧೀನಕ್ಕೆ ಅವಶ್ಯವಿರುವ ಕ್ಷೇತ್ರ | ಚೆಕ್‌ಬಂದಿ | | | |
|---|---|---|---|---|---|---|---|---|---|---|---|---|
| | | | | | | | | | ಪೂರ್ವ ಸ.ಸಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 1. | 1. ಶಶಿಕಾಂತ ಚಂದ್ರಕಾಂತ ವೆಲಂಗಿ<br>2. ಶ್ರೀಮತಿ ಶಾಂತಾ ಗೋಪಾಲಕೃಷ್ಣ ವೆಲಂಗಿ<br>3. ಮಹಾದೇವ ಜಿ.ಗೋಪಾಲಕೃಷ್ಣ ವೆಲಂಗಿ<br>4. ಲಕ್ಷ್ಮೀ ಸಂಜಯ ವೆಲಂಗಿ | ಬೆಳಗಾವಿ | ಅನಗೋಳ | 28/4 | ಕೆಂಪು | 0–7–0 | 0–21 | 0–7–00–0 | 28 ಭಾಗ | 27 | 28 ಭಾಗ | 25 |

P.R. 35

SC. - 100

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಾಗರಾಜ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59